# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1560 (1863) |
| ಸದಸ್ಯರ ಹೆಸರು | : | ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 22-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯಾದ್ಯಂತ ಮೂರು ವರ್ಷಗಳಿಂದ ಅರಣ್ಯ ಪ್ರದೇಶನವೆಂದು ಮೀಸಲಿಟ್ಟಿರುವ ಪ್ರದೇಶವನ್ನು ಅಕ್ರಮವಾಗಿ ಒತ್ತುವರಿ ಮಾಡಿರುವ ಭೂ ಪ್ರದೇಶವೆಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು)</td><td>ರಾಜ್ಯಾದ್ಯಂತ ಮೂರು ವರ್ಷಗಳಿಂದ ಅರಣ್ಯ ಪ್ರದೇಶವೆಂದು ಮೀಸಲಿಟ್ಟಿರುವ ಪ್ರದೇಶವನ್ನು ಅಕ್ರಮವಾಗಿ ಒತ್ತುವರಿ ಮಾಡಿರುವ ಭೂ ಪ್ರದೇಶದ ಜಿಲ್ಲಾವಾರು ಮಾಹಿತಿ ಈ ಕೆಳಕಂಡಂತಿದೆ:
<table>
<tr><th>ಕ್ರಮ ಸಂಖ್ಯೆ</th><th>ಜಿಲ್ಲೆ</th><th>ವಿಸ್ತೀರ್ಣ (ಹೆಕ್ಟೇರ್)</th></tr>
<tr><td>1</td><td>ಕೊಡಗು</td><td>7.79</td></tr>
<tr><td>2</td><td>ಉತ್ತರ ಕನ್ನಡ</td><td>2.30</td></tr>
<tr><td>3</td><td>ಚಾಮರಾಜನಗರ</td><td>1.62</td></tr>
<tr><td>4</td><td>ಚಿಕ್ಕಮಗಳೂರು</td><td>39.85</td></tr>
<tr><td>5</td><td>ಉಡುಪಿ</td><td>4.10</td></tr>
<tr><td>6</td><td>ತುಮಕೂರು</td><td>20.77</td></tr>
<tr><td>7</td><td>ಶಿವಮೊಗ್ಗ</td><td>685.54</td></tr>
<tr><td>8</td><td>ಬೆಂಗಳೂರು ನಗರ</td><td>40.19</td></tr>
<tr><td>9</td><td>ರಾಮನಗರ</td><td>51.50</td></tr>
<tr><td></td><td>ಒಟ್ಟು</td><td>853.66</td></tr>
</table></td></tr>
<tr><td>ಆ)</td><td>ಅರಣ್ಯ ಪ್ರದೇಶವೆಂದು ಘೋಷಿಸಲ್ಪಟ್ಟಿರುವ ಪ್ರದೇಶದಲ್ಲಿ ಅಕ್ರಮ ಒತ್ತುವರಿಯನ್ನು ನಿಯಂತ್ರಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; ಹಾಗೂ ಅರಣ್ಯ ಪ್ರದೇಶವನ್ನು ಒತ್ತುವರಿ ಮಾಡಿರುವ ವ್ಯಕ್ತಿಗಳ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಂಡಿದೆ;</td><td>ಅರಣ್ಯ ಪ್ರದೇಶವೆಂದು ಘೋಷಿಸಲ್ಪಟ್ಟಿರುವ ಪ್ರದೇಶದಲ್ಲಿ ಅಕ್ರಮ ಒತ್ತುವರಿಯನ್ನು ನಿಯಂತ್ರಿಸಲು ಒತ್ತುವರಿದಾರರ ವಿರುದ್ಧ ಅರಣ್ಯ ಮೊಕದ್ದಮೆಯನ್ನು ದಾಖಲಿಸಿ, ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಭೂ ಕಬಳಿಕೆ ವಿಶೇಷ ನ್ಯಾಯಾಲಯದಲ್ಲಿ ದಾವೆ ಹೂಡುತ್ತಿದ್ದು ಹಾಗೂ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 64(ಎ) ಪ್ರಕಾರ ಕ್ರಮ ಕೈಗೊಳ್ಳಲಾಗುತ್ತಿದೆ.</td></tr>
<tr><td>ಇ)</td><td>ಅರಣ್ಯ ಪ್ರದೇಶ ಒತ್ತುವರಿಯಿಂದ, ವನ್ಯ ಮೃಗಗಳು ಗ್ರಾಮಗಳಿಗೆ ನುಗ್ಗಿ ಜನ ಹಾಗೂ ಸಾಕು ಪ್ರಾಣಿಗಳ ಮೇಲೆ ದಾಳಿ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ವನ್ಯ ಮೃಗಗಳ ಹಾವಳಿಯನ್ನು ನಿಯಂತ್ರಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ;</td><td>ವನ್ಯಪ್ರಾಣಿಗಳು ನಗರ / ಪಟ್ಟಣದ ವಸತಿ ಪ್ರದೇಶಗಳಿಗೆ ಬರುವುದನ್ನು ತಡೆಯಲು ಇಲಾಖಾ ವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>1. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನ ಗೊಳಿಸಿ ವನ್ಯಪ್ರಾಣಿಗಳ ಆವಾಸ ಸ್ಥಾನವನ್ನು ಅಭಿವೃದ್ಧಿ</td></tr>
</table>

| | | |
|---|---|---|
| | | ಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ, ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ತಡೆಯಲಾಗುತ್ತಿದೆ.<br>2. ಅರಣ್ಯ ಪ್ರದೇಶಗಳಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು ಹೆಚ್ಚಿನ ಅರಣ್ಯ ಪ್ರದೇಶಗಳಲ್ಲಿ ದಟ್ಟವಾಗಿ ಬೆಳೆದ ಲಂಟಾನ ಮತ್ತು ಯುಪಟೋರಿಯಂ ಕಳೆಗಳಿಂದಾಗಿ ಹುಲ್ಲಿನ ಬೆಳವಣಿಗೆಗೆ ತೀವ್ರ ಅಡಚಣೆಯಾಗಿ ಅರಣ್ಯದಲ್ಲಿ ಹುಲ್ಲಿನ ಲಭ್ಯತೆ ಗಣನೀಯವಾಗಿ ಕಡಿಮೆಯಾಗಿರುವುದರಿಂದ ಹುಲ್ಲು ಬೆಳೆಯುವ ಪ್ರದೇಶಗಳಲ್ಲಿ ಬೆಳೆದಿರುವ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅನುವು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.<br>3. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ನಿರ್ವಹಣೆ, ಆನೆತಡೆ ಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗಿದ್ದು ಮತ್ತು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>4. ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ Rapid Response Teams (RRT) ಗಳನ್ನು ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Wireless networking ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>5. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>6. ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನ-ವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವ ಗಾಯ ತಪ್ಪಿಸಲು ಕ್ರಮ ವಹಿಸಲಾಗುತ್ತಿದೆ. |

| | | |
|---|---|---|
| | | 7. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗ್ಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br>8. ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಹಾನಿ ಪ್ರಕರಣಗಳಲ್ಲಿ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದ್ದು, ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ಆದ್ಯತೆ ಮೇರೆಗೆ ನಿಯಮಾನುಸಾರ ಪರಿಶೀಲಿಸಿ, ಶೀಘ್ರವೇ ನೇರವಾಗಿ ಸಂತ್ರಸ್ಥರ ಖಾತೆಗೆ ಪಾವತಿಸುವ ಪ್ರಕ್ರಿಯೆಯನ್ನು ಇ-ಪರಿಹಾರ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. |
| ಈ) | ಕಳೆದ ಎರಡು ವರ್ಷಗಳಿಂದ ರಾಜ್ಯಾದ್ಯಂತ ವನ್ಯ ಮೃಗಗಳಾದ ಹುಲಿ, ಚಿರತೆ, ಆನೆ, ಸಿಂಹ ಈ ಪ್ರಾಣಿಗಳಿಂದ ದಾಳಿಗೊಳಗಾದವರ ಸಂಖ್ಯೆ ಎಷ್ಟು; ಈ ದಾಳಿಯಲ್ಲಿ ಮೃತಪಟ್ಟವರ ಸಂಖ್ಯೆ ಎಷ್ಟು; ಮೃತಪಟ್ಟವರಿಗೆ ಮತ್ತು ಗಂಭೀರವಾಗಿ ದಾಳಿಗೊಳಗಾದವರಿಗೆ ಪರಿಹಾರ ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಸರ್ಕಾರ ಇದುವರೆಗೂ ಎಷ್ಟು ಜನಕ್ಕೆ ಪರಿಹಾರ ನೀಡಿದೆ? (ಜಿಲ್ಲಾವಾರು ಮಾಹಿತಿ ನೀಡುವುದು) | ಕಳೆದ ಎರಡು ವರ್ಷಗಳಲ್ಲಿ ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಮಾನವ-ಪ್ರಾಣ ಹಾನಿ ಹಾಗೂ ಮಾನವ ಗಾಯಾ ಪ್ರಕರಣಗಳ ವಿವರ ಹಾಗೂ ಪಾವತಿಸಿದ ದಯಾತ್ಮಕ ಧನದ ವಿವರವನ್ನು ಅನುಂಧದಲ್ಲಿ ಲಗತ್ತಿಸಿದೆ.<br>ಸರ್ಕಾರದ ಆದೇಶ ಸಂಖ್ಯೆ ಎಫ್‌ಇಇ 130 ಎಫ್‌ಡಬ್ಲ್ಯೂಎಲ್ 2016 ದಿನಾಂಕ:19-09-2016 ಆದೇಶದಲ್ಲಿ ಶಾಶ್ವತ ಅಂಗವಿಕಲತೆ ಉಂಟಾದಲ್ಲಿ ರೂ 5,00,000/-ಪರಿಹಾರಧನವನ್ನು ಮತ್ತು ಭಾಗಶಃ ಅಂಗವಿಕಲತೆ ಹೊಂದಿದ್ದಲ್ಲಿ ರೂ 2,50,000/- ಪರಿಹಾರಧನವನ್ನು ಅಂಗವಿಕಲ ವ್ಯಕ್ತಿಗೆ ನೀಡಲಾಗುತ್ತಿದೆ. ಮಾನವ ಗಾಯಗೊಂಡ ವ್ಯಕ್ತಿಗೆ ಗರಿಷ್ಠ ರೂ. 30,000/-ಗಳ ದಯಾತ್ಮಕ ಧನ ಪಾವತಿಸಲಾಗುತ್ತಿದೆ.<br>ಮಾನವ ಗಾಯ / ಭಾಗಶಃ ಅಂಗವಿಕಲಲತೆ / ಶಾಶ್ವತ ಅಂಗವಿಕಲತೆ ಪ್ರಕರಣಗಳಿಗೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಇಇ 128 ಎಫ್‌ಡಬ್ಲ್ಯೂಎಲ್ 2013 ದಿನಾಂಕ:15-05-2015 ರನ್ವಯ ದಯಾತ್ಮಕ ಧನದ ಜೊತೆಗೆ ವೈದ್ಯಕೀಯ ವೆಚ್ಚವನ್ನು ಸಿ.ಜಿ.ಹೆಚ್.ಎಸ್. ದರಗಳ ಪ್ರಕಾರ ಪಾವತಿಸಲಾಗುತ್ತದೆ.<br>ಸರ್ಕಾರದ ಆದೇಶ ಸಂಖ್ಯೆ:ಅಪಜೀ-66-ಎಫ್‌ಡಬ್ಲ್ಯೂಎಲ್-2019, ದಿನಾಂಕ :07/01/2020ರಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಮಾನವ ಪ್ರಾಣ ಹಾನಿ ಪ್ರಕರಣಗಳಲ್ಲಿ ರೂ.7.50 ಲಕ್ಷಗಳ ದಯಾತ್ಮಕ ಧನವನ್ನು ಪಾವತಿಸಲು ಅವಕಾಶವಿದ್ದು, ಸರ್ಕಾರದ ದಿನಾಂಕ:02/01/2021ರ ಸೇರ್ಪಡೆ ಆದೇಶದಲ್ಲಿ ಘಟನೆ ನಡೆದ ಕೂಡಲೇ ರೂ.2.00 |

| | | |
|---|---|---|
| | | ಲಕ್ಷಗಳನ್ನು ಪಾವತಿಸಿ, ಉಳಿದ ರೂ.5.50 ಲಕ್ಷಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಹಂತದಲ್ಲಿ ವಿಚಾರಣೆ ನಡೆಸಿ, ಅಗತ್ಯವಿರುವ ಎಲ್ಲಾ ಅಧಿಕೃತ ದಾಖಲೆಗಳನ್ನು ಪಡೆದುಕೊಂಡು, ಅವುಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಂಡು, ಕಾನೂನುಬದ್ಧ ವಾರಸುದಾರರಿಗೆ ಬಿಡುಗಡೆ ಮಾಡಲಾಗುತ್ತದೆ.<br>ಅಲ್ಲದೇ ಸರ್ಕಾರಿ ಆದೇಶ ಸಂಖ್ಯೆ. ಅಪಜೀ 68-ಎಫ್‌ಎಪಿ-2018, ದಿನಾಂಕ:16-10-2018 ರಂತೆ ಮೃತರ ಕುಟುಂಬದ ವಾರಸುದಾರರಿಗೆ 05 ವರ್ಷಗಳವರೆಗೆ ರೂ.2,000/-ಗಳ ಮಾಸಾಶನವನ್ನು ಸಹ ನೀಡಲಾಗುತ್ತಿದೆ. |

**ಸಂಖ್ಯೆ: ಅಪಜೀ 26 ಎಫ್‌ಜಿಎಲ್ 2021**

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

## ಅನುಬಂಧ - 1

| ಕ್ರ.ಸಂ | ವಿಭಾಗ / ಜಿಲ್ಲೆ | ಮಾನವ ಗಾಯ | | | | | | ಮಾನವ ಪ್ರಾಣ ಹಾನಿ | | | | | |
|---|---|---|---|---|---|---|---|---|---|---|---|---|---|
| | | 2018-19 | | 2019-20 | | 2020-21 (15 ...) | | 2018-19 | | 2019-20 | | 2020-21 (15 ಮಾರ್ಚ್) | |
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1 | ರಾಮನಗರ | 14 | 9.340 | 2 | 0.457 | 14 | 13.920 | 1 (ಆನೆ) | 5.00 | 2 (ಆನೆ) | 10.00 | 2 (ಚಿರತೆ) | 15 |
| 2 | ಬೆಂಗಳೂರು ಗ್ರಾಮಾಂತರ | – | | 3 | 0.18 | – | | – | – | 1 (ಆನೆ) | 5.00 | – | – |
| 3 | ಬನ್ನೇರುಘಟ್ಟ ರಾ.ಉ | 2 | 0.550 | 1 | 0.09 | 1 | 0.300 | – | – | 1 (ಆನೆ) | 7.50 | 1 | 7.5 |
| 4 | ಕೋಲಾರ | 2 | 0.400 | 2 | 8.52 | – | | 1 (ಆನೆ) | 5.00 | 3 (ಆನೆ) | 22.50 | 3 (ಆನೆ) | 22.5 |
| 5 | ಚಿಕ್ಕಬಳ್ಳಾಪುರ | – | | – | 0 | 1 | 2.000 | – | – | – | | – | – |
| 6 | ಬೆಳಗಾವಿ | 5 | 2.850 | 5 | 3.03 | – | | 1 (ಕರಡಿ) | 5.00 | – | | – | – |
| 7 | ಬಾಗಲಕೋಟೆ | 1 | 0.440 | | | | | 1 (ಮೊಸಳೆ) | 5.00 | 1 (ಮೊಸಳೆ) | 5.00 | 1 (ಮೊಸಳೆ) | 7.5 |
| 8 | ಬಿಜಾಪುರ | 2 | 0.400 | 1 | 1.06 | | | 1 (ಮೊಸಳೆ) | 5.00 | | | 1 (ತೋಳ) | 7.5 |
| 9 | ಗೋಕಾಕ್ | 7 | 0.730 | – | | – | | – | – | – | | – | – |
| 10 | ಬಳ್ಳಾರಿ | 3 | 0.520 | 7 | 2.94 | 2 | 1.460 | 3 (ಚಿರತೆ) | 15.00 | 1 (ಕರಡಿ) 1 (ಮೊಸಳೆ) | 12.50 | – | – |
| 11 | ಚಿತ್ರದುರ್ಗ | 10 | 2.140 | – | | 1 | 0.190 | – | – | 1 (ಕರಡಿ) | 5.00 | – | – |
| 12 | ದಾವಣಗೆರೆ | 5 | 1.410 | 4 | 2.76 | – | | – | – | – | | – | – |
| 13 | ಕೊಪ್ಪಳ | 2 | 0.410 | – | | 7 | 2.100 | – | – | – | | 2 (ಚಿರತೆ) | 15 |
| 14 | ಬಿ.ಆರ್.ಟಿ | 5 | 0.870 | 7 | 0.82 | 7 | 1.850 | 3 (ಆನೆ) | 15.00 | 1 (ಆನೆ) | | 1 (ಆನೆ) | 7.5 |
| 15 | ಕಾವೇರಿ | 7 | 1.210 | – | | – | | 1 (ಆನೆ) | 5.00 | 1 (ಆನೆ) | 5.00 | 1 (ಆನೆ) | 7.5 |
| 16 | ಮಲೈ ಮಹದೇಶ್ವರ | 2 | 0.270 | 3 | 5.71 | 1 | 0.106 | 1 (ಆನೆ) | 5.00 | 4 (ಆನೆ) | 20.00 | 1 (ಆನೆ) | 7.5 |
| 17 | ಚಿಕ್ಕಮಗಳೂರು | 8 | 3.390 | 2 | 2.52 | 1 | 0.500 | 2 (ಆನೆ) | 10.00 | 3 (ಆನೆ) | 15.00 | – | – |
| 18 | ಭದ್ರಾ | 1 | 0.200 | – | | – | | – | – | – | | – | – |
| 19 | ಕೊಪ್ಪ | 1 | 0.450 | 2 | 0.46 | 1 | 0.300 | 1 (ಕಾಡು ಕೋಣ) | – | 2 (ಕಾಡು ಕೋಣ) | 12.50 | – | – |
| 20 | ಧಾರವಾಡ | – | | – | | – | | – | – | – | | – | – |
| 21 | ಗದಗ | 21 | 2.570 | – | | – | | – | – | – | | – | – |
| 22 | ಹಾವೇರಿ | 1 | 0.300 | 4 | 0.3 | – | | – | – | – | | – | – |
| 23 | ಬಂಡೀಪುರ | 9 | 2.220 | 11 | 1.34 | – | | 1 (ಆನೆ) | 5.00 | 3 (ಆನೆ) 2 (ಹುಲಿ) | 27.50 | 2 (ಆನೆ) | 15 |
| 24 | ನಾಗರಹೊಳೆ | 1 | 0.300 | 4 | 0.74 | 7 | 2.700 | 1 (ಆನೆ) 3 (ಹುಲಿ) | 20.00 | – | | (1 ಹುಲಿ) | 7.5 |
| 25 | ಬೀದರ್ | 1 | 0.200 | – | | – | | – | – | 1 (ಕರಡಿ) | 7.50 | – | – |
| 26 | ಕಲಬುರಗಿ | 11 | 2.200 | – | | 7 | 0.900 | 1 (ಕಾಡು ಹಂದಿ) | – | 1 (ಕಾಡು ಹಂದಿ) | 5.00 | 2 (ಕಾಡು ಹಂದಿ) | 15 |
| 27 | ರಾಯಚೂರು | | | | | 24 | 6.500 | | | 1 (ತೋಳ) | 7.50 | 1 (ಮೊಸಳೆ) | 7.5 |
| 28 | ಯಾದಗಿರಿ | 2 | 0.190 | 2 | 0.6 | 2 | 2.600 | | | 1 (ಮೊಸಳೆ) | 5.00 | 1 (ಮೊಸಳೆ) | 7.5 |

| ಕ್ರ.ಸಂ | ವಿಭಾಗ | ಮಾನವ ಗಾಯ | | | | | | ಮಾನವ ಪ್ರಾಣ ಹಾನಿ | | | | | |
|---|---|---|---|---|---|---|---|---|---|---|---|---|---|
| | | 2018-19 | | 2019-20 | | 2020-21 (15...) | | 2018-19 | | 2019-20 | | 2020-21 (15...) | |
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 29 | ದಾಂಡೇಲಿ | 1 | 0.020 | 1 | 0.2 | 3 | 0.880 | – | – | – | | – | – |
| 30 | ಹಳಿಯಾಳ | 1 | 0.023 | 2 | 0.53 | 1 | 0.120 | – | – | – | | – | – |
| 31 | ಹೊನ್ನಾವರ | 2 | 0.520 | 3 | 0.5 | 3 | 0.620 | – | – | – | | – | – |
| 32 | ಶಿರಸಿ | – | | – | | – | | – | – | – | | – | – |
| 33 | ಯಲ್ಲಾಪುರ | 8 | 3.380 | 1 | 0.05 | – | | – | – | – | | – | – |
| 34 | ಹಾಸನ | 7 | 2.420 | 4 | 0.97 | 2 | 0.330 | 1 (ಆನೆ) | 5.00 | 3 (ಆನೆ) | 15.00 | 5 (ಆನೆ) | 37.5 |
| 35 | ತುಮಕೂರು | 24 | 12.310 | 28 | 23 | 41 | 5.200 | 1 (ಕರಡಿ) | 5.00 | 1 (ಆನೆ) 4 (ಚಿರತೆ) | 32.50 | 2 (ಚಿರತೆ) | 15 |
| 36 | ಮಡಿಕೇರಿ | 4 | 1.130 | 4 | 1.81 | – | | – | – | 3 (ಆನೆ) | 17.50 | 4 (ಆನೆ) | 30 |
| 37 | ವಿರಾಜಪೇಟೆ | 8 | 3.050 | 7 | 1.91 | | | | | 1 (ಆನೆ) 1(ಕಾಡುಕೋಣ) | 12.50 | 2 (ಆನೆ) 3 (ಹುಲಿ) | 37.5 |
| 38 | ಮಡಿಕೇರಿ ವಜೀ | 3 | 1.940 | 1 | 0.11 | 2 | 0.200 | – | – | 1 (ಆನೆ) | 5.00 | – | . |
| 39 | ಕುದುರೆಮುಖ ವಜೀ | – | | – | | – | | – | – | – | | – | – |
| 40 | ಕುಂದಾಪುರ | 4 | 0.640 | 6 | 1.61 | – | | 1 (ಕಾಡು ಹಂದಿ) | – | 2 (ಕಾಡು ಕೋಣ) 1 ([illegible]) | 15.00 | – | – |
| 41 | ಮಂಗಳೂರು | 1 | 0.800 | 1 | 0.53 | – | | – | – | – | | – | – |
| 42 | ಮಂಡ್ಯ | 5 | 1.600 | – | | 2 | 0.050 | 1 ([illegible]) | 5.00 | – | | – | – |
| 43 | ಹುಣಸೂರು | 7 | 3.670 | – | | – | | – | – | – | | – | – |
| 44 | ಮೈಸೂರು | 9 | 2.560 | 6 | 1.65 | 2 | 0.678 | – | – | 2 (ಆನೆ) | 12.50 | 1 (ಆನೆ) | 7.5 |
| 45 | ಮೈಸೂರು ವಜೀ | – | | – | | – | | – | – | – | | – | – |
| 46 | ಭದ್ರಾವತಿ | 7 | 1.240 | 1 | 0.18 | 2 | 5.300 | – | – | – | | – | – |
| 47 | ಸಾಗರ | 1 | 0.030 | – | | 1 | 0.300 | – | – | – | | – | – |
| 48 | ಶಿವಮೊಗ್ಗ | 2 | 0.220 | 1 | 0.31 | – | | – | – | – | | – | – |
| 49 | ಶಿವಮೊಗ್ಗ ವಜೀ | – | | – | | – | | – | – | – | | – | – |
| | ಒಟ್ಟು | 237 | 69.113 | 126 | 64.887 | 105 | 49.104 | 26 | 75.00 | 50 | 282.50 | 37 | 277.5* |

* ಎಲ್ಲಾ ಪ್ರಕರಣಗಳಲ್ಲಿ ಸರ್ಕಾರದ ಆದೇಶ ದಿನಾಂಕ:07-01-2020 ರಂತೆ ಘಟನೆ ನಡೆದ ಕೂಡಲೇ ರೂ.2.00 ಲಕ್ಷಗಳ [illegible] ಧನ ಪಾವತಿಸಲಾಗಿದ್ದು ಉಳಿದ ಮೊತ್ತ ರೂ.5.50 ಲಕ್ಷಗಳನ್ನು ಅಗತ್ಯ ದಾಖಲೆಗಳು ಸಲ್ಲಿಸಿದ ನಂತರ ಪಾವತಿಸಲು ಕ್ರಮ ಕೈಗೊಳ್ಳಲಾಗುವುದು.